<u>ಕರ್ನಾಟಕ ವಿಧಾನ ಪರಿಷತ್</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 673
2. ಸದಸ್ಯರ ಹೆಸರು :ಶ್ರೀ ಪಿ.ಆರ್.ರಮೇಶ್ (ನಾಮ ನಿರ್ದೇಶನ
3. ಉತ್ತರಿಸುವ ದಿನಾಂಕ : 17.12.2021
4. ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಡಿಯಲ್ಲಿ ಸಹಾಯಕ ನಿರ್ದೇಶಕರು, ತಾಲ್ಲೂಕು ಪಂಚಾಯತಿ ಕಛೇರಿಯಲ್ಲಿ ಪ್ರಸ್ತುತ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು (ತಾಲ್ಲೂಕುವಾರು ವಿವರ ನೀಡುವುದು); | ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ) ಖಾಲಿ ಹುದ್ದೆಗಳ ವಿವರಗಳನ್ನು ಅನುಬಂಧ-1 ರಲ್ಲಿ ಹಾಗೂ ಸಹಾಯಕ ನಿರ್ದೇಶಕ (ಪಂಚಾಯತ್ ರಾಜ್) ಖಾಲಿ ಹುದ್ದೆಗಳ ವಿವರಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. |
| ಆ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದದಿಂದ ಖಾಲಿ ಇರುವ ಸಹಾಯಕ ನಿರ್ದೇಶಕರ ವೃಂದದ ಹುದ್ದೆಗೆ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರದ ಕ್ರಮವೇನು; (ವಿವರ ನೀಡುವುದು). | ಮಿಕ್ಕುಳಿದ ಮೂಲ/ಮಾತೃ ವೃಂದಕ್ಕೆ ಸೇರಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕ ಹುದ್ದೆಗೆ ಮುಂಬಡ್ತಿ ನೀಡಲು ಸಾಧ್ಯವಾಗದಿರುವ ವಿಷಯವು ಸರ್ಕಾರದ ಗಮನದಲ್ಲಿದೆ.<br><br>ಪಂಚಾಯತ್ ಅಭಿವೃದ್ಧಿ ಅಧಿಕಾರಿ ವೃಂದದ ಜೇಷ್ಠತಾ ಪಟ್ಟಿ ದಿನಾಂಕ:21.2.2014 ಹಾಗೂ ದಿನಾಂಕ:28.12.2017ಗಳನ್ನು ಮಾನ್ಯ ಕೆ.ಎ.ಟಿಯು ಅರ್ಜಿ ಸಂಖ್ಯೆ:2259-2261/2014 ಹಾಗೂ ತತ್ಸಂಬಂದಿತ ಅರ್ಜಿಗಳಲ್ಲಿ ದಿನಾಂಕ:18.3.2019ರಂದು ನೀಡಿರುವ ತೀರ್ಪಿನಲ್ಲಿ ರದ್ದುಪಡಿಸಿರುತ್ತದೆ. ಮಾನ್ಯ ಕೆ.ಎ.ಟಿಯ ಆದೇಶವನ್ನು ಪ್ರಶ್ನಿಸಿ ಬಾಧಿತರು ಹಾಗೂ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ವಿವಿಧ ರಿಟ್ ಅರ್ಜಿಗಳನ್ನು ಸಲ್ಲಿಸಿದ್ದು, ರಿಟ್ ಅರ್ಜಿ ಸಂಖ್ಯೆ:201903-201906/2019, 26196- 26207/19 ಮತ್ತು 33613/2019 ರ ಪ್ರಕರಣಗಳಲ್ಲಿ ನೀಡಿರುವ ಮಧ್ಯಂತರ ಆದೇಶಗಳ ಕಾರಣಗಳಿಂದ |

| | | |
|---|---|---|
| | | ಪ್ರಶ್ನಿತ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ಮಿಕ್ಕುಳಿದ ಮಾತೃ ವೃಂದಕ್ಕೆ ಸೇರಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕ (ಗ್ರಾಉ)/(ಪಂ.ರಾ) ಮುಂಬಡ್ತಿ ನೀಡಲು ಸಾಧ್ಯವಾಗಿರುವುದಿಲ್ಲ. ಆದ್ದಾಗ್ಯೂ, ಖಾಲಿ ಇರುವ ಹುದ್ದೆಗಳ ಎದುರು ಅರ್ಹ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ರ ನಿಯಮ -32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸುವ ಬಗ್ಗೆ ಅನುಮತಿ ಕೋರಿ ಸಲ್ಲಿಸಲಾದ ಮಧ್ಯಂತರ ಅರ್ಜಿಗಳು ದಿನಾಂಕ: 09.7.2020 ವಜಾಗೊಂಡಿರುತ್ತವೆ.<br>ಮಧ್ಯಂತರ ಅರ್ಜಿಗಳಲ್ಲಿನ ಆದೇಶದ ಕುರಿತು ಸಲ್ಲಿಸಲಾದ ಪುನರ್ ಪರಿಶೀಲನಾ ಅರ್ಜಿ ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾದ ಎಸ್.ಎಲ್.ಪಿ ಗಳು ಪುರಸ್ಕೃತ ಗೊಂಡಿರುವುದಿಲ್ಲ.<br><br>ರಿಟ್ ಅರ್ಜಿ ಸಂಖ್ಯೆ: 201903-201906/2019, 26196-26207/19 33613/2019 ಹಾಗೂ ತತ್ಸಂಬಂಧಿತ ಅರ್ಜಿಗಳನ್ನು ಇತ್ಯರ್ಥಪಡಿಸುವ ಬಗ್ಗೆ ಹಿಂಬಾಲಿಕ ಕ್ರಮಗಳನ್ನು ಕೈಗೊಳ್ಳಲಾಗುತ್ತಿದ್ದು, ಮಾನ್ಯ ನ್ಯಾಯಾಲಯವು ನೀಡುವ ಮುಂದಿನ/ಅಂತಿಮ ಆದೇಶಕ್ಕೆ ಅನುಗುಣವಾಗಿ ಪರಿಶೀಲಿಸಿಕೊಂಡು ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ) ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು ಕ್ರಮ ಕೈಗೊಳ್ಳಲಾಗುವುದು. |
| ೩ | ನ್ಯಾಯಾಲಯದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದದ 2014 ರ ಜೇಷ್ಠತಾ ಪಟ್ಟಿ ರದ್ದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ರದ್ದಾದ ಮೂಲ ಜೇಷ್ಠತಾ ಪಟ್ಟಿಯಿಂದ ಸಿದ್ಧಪಡಿಸಿರುವ ಹೈದ್ರಾಬಾದ್-ಕರ್ನಾಟಕ ಭಾಗದ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ಜೇಷ್ಠತಾ ಪಟ್ಟಿಯ ಮಾನ್ಯತೆ ಕುರಿತು | ಮಾನ್ಯ ಕೆ.ಎ.ಟಿಯು ಅರ್ಜಿ ಸಂಖ್ಯೆ:2259-2261/2014 ಹಾಗೂ ತತ್ಸಂಬಂಧಿತ ಅರ್ಜಿಗಳಲ್ಲಿ ದಿನಾಂಕ:18.3.2019 ರಂದು ನೀಡಿರುವ ತೀರ್ಪಿನಲ್ಲಿ ದಿನಾಂಕ:21.2.2014 ಹಾಗೂ ದಿನಾಂಕ:28.12.2017ರ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ರದ್ದುಪಡಿಸಿದ್ದರೂ, ಸದರಿ ಆದೇಶವನ್ನು ಪ್ರಶ್ನಿಸಿ ಸಲ್ಲಿಸಲಾದ ರಿಟ್ ಅರ್ಜಿ ಸಂಖ್ಯೆ:201903-06/2019 ರ ಪ್ರಕರಣದಲ್ಲಿ |

| | | |
|---|---|---|
| | ಸರ್ಕಾರದ ನಿಲುವೇನು; (ಸ್ಪಷ್ಟವಾದ ಮಾಹಿತಿಯನ್ನು ಒದಗಿಸುವುದು). | ದಿನಾಂಕ:09.4.2019 ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಕೆ.ಎ.ಟಿಯ ದಿನಾಂಕ:18.3.2019 ಆದೇಶಕ್ಕೆ ತಡೆಯಾಜ್ಞೆ ನೀಡಿರುತ್ತದೆ. ದಿನಾಂಕ:19.6.2019 ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಪರಿಷ್ಕೃತ ಜೇಷ್ಠತಾ ಪಟ್ಟಿಯನ್ನು ಹೊರಡಿಸುವ ಕುರಿತಂತೆ ಯಥಾಸ್ಥಿತಿ ಕಾಯ್ದುಕೊಳ್ಳಲು ತಿಳಿಸಿರುತ್ತದೆ. ಈ ಕಾರಣದಿಂದ ದಿನಾಂಕ:21.2.2014 ರ ಜೇಷ್ಠತಾ ಪಟ್ಟಿ ರದ್ದುಗೊಂಡಿರುತ್ತದೆ ಎಂದು ಖಚಿತವಾಗಿ ಭಾವಿಸಲು ಬರುವುದಿಲ್ಲ.<br><br>ದಿನಾಂಕ:21.2.2014ರ ಜೇಷ್ಠತಾ ಪಟ್ಟಿಯನ್ನು ಪ್ರಶ್ನಿಸಿ, 2014ನೇ ಸಾಲಿನಲ್ಲಿಯೇ ವಿವಿಧ ಕೆ.ಎ.ಟಿ ಅರ್ಜಿಗಳು ದಾಖಲಾಗಿದ್ದು, ವಿಚಾರಣೆಗೆ ಬಾಕಿ ಇದ್ದವು. ಕಲ್ಯಾಣ - ಕರ್ನಾಟಕ ಸ್ಥಳೀಯ ವೃಂದಕ್ಕೆ ಸೇರಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಪ್ರತ್ಯೇಕ ಜೇಷ್ಠತಾ ಪಟ್ಟಿಯನ್ನು ದಿ:31.12.2014 ರಲ್ಲಿದ್ದಂತೆ ದಿನಾಂಕ:18.05.2015 ರಂದು ಹೊರಡಿಸಿದ್ದು, ಸದರಿ ಜೇಷ್ಠತಾ ಪಟ್ಟಿಯನ್ನು ಪ್ರಶ್ನಿಸಿ, ನಿರ್ದಿಷ್ಟವಾಗಿ ಯಾವುದೇ ಕೆ.ಎ.ಟಿ ಅರ್ಜಿ/ರಿಟ್ ಅರ್ಜಿ ದಾಖಲಾಗಿರುವ ಮಾಹಿತಿ ಇರುವುದಿಲ್ಲ. ಕಲ್ಯಾಣ -ಕರ್ನಾಟಕ ಪ್ರದೇಶದ ಹಿತದೃಷ್ಟಿಯಿಂದ ಹಾಗೂ ದಿ:21.2.2014ರ ಜೇಷ್ಠತಾ ಪಟ್ಟಿಯ ಕುರಿತು ಬಾಕಿ ಇರುವ ರಿಟ್ ಅರ್ಜಿಗಳಲ್ಲಿನ ತೀರ್ಪಿಗೆ ಒಳಪಟ್ಟು ದಿನಾಂಕ:18.5.2015 ರ ಕಲ್ಯಾಣ- ಕರ್ನಾಟಕ ಸ್ಥಳೀಯ ವೃಂದದ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ಕಲ್ಯಾಣ- ಕರ್ನಾಟಕ ಸ್ಥಳೀಯ ಪ್ರದೇಶಕ್ಕೆ ಲಭ್ಯವಾಗುವ ಹುದ್ದೆಗಳಿಗೆ ಮಾತ್ರ ಅರ್ಹ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ವಿವಿಧ ದಿನಾಂಕಗಳಲ್ಲಿ ಮುಂಬಡ್ತಿ ನೀಡಲಾಗಿದೆ. |
| ಈ | ರದ್ದಾದ ಮೂಲ ಜೇಷ್ಠತಾ ಪಟ್ಟಿ ಆಧರಿಸಿ ಹೈದರಾಬಾದ್ ಕರ್ನಾಟಕ ಭಾಗದ ಪಂಚಾಯತ್ ಅಭಿವೃದ್ಧಿ | ದಿನಾಂಕ:21.2.2014ರ ಜೇಷ್ಠತಾ ಪಟ್ಟಿಯನ್ನು ದಿನಾಂಕ:31.12.2011 ರಂದು ಇದ್ದಂತೆ ಹೊರಡಿಸಲಾಗಿತ್ತು. ಸಂವಿಧಾನದ |

| | | |
|---|---|---|
| | ಅಧಿಕಾರಿಗಳಿಗೆ ಸಿದ್ಧಪಡಿಸಿದ ಹೊಸ ಜೇಷ್ಠತಾ ಪಟ್ಟಿ ಆಧರಿಸಿ ಮುಂಬಡ್ತಿ ನೀಡಿರುವುದರ ಕುರಿತು ಸರ್ಕಾರದ ನಿಲುವೇನು (ಸ್ಪಷ್ಟವಾದ ಮಾಹಿತಿಯನ್ನು ಒದಗಿಸುವುದು) | 371(ಜೆ) ಅನುಚ್ಛೇದದ ತಿದ್ದುಪಡಿ ಹಾಗೂ ಕರ್ನಾಟಕ ಸಾರ್ವಜನಿಕ ಉದ್ಯೋಗ (ಕಲ್ಯಾಣ –ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಅಧಿನಿಯಮ 2013 ರಂತೆ ಕಲ್ಯಾಣ ಕರ್ನಾಟಕ ಪ್ರದೇಶದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಪ್ರತ್ಯೇಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:18.5.2015 ರಂದು ಹೊರಡಿಸಲಾಗಿರುತ್ತದೆ. ಕಲ್ಯಾಣ ಕರ್ನಾಟಕ ಸ್ಥಳೀಯ ಅಭ್ಯರ್ಥಿಗಳಿಗೆ ಕಲ್ಪಿಸಿರುವ ಮೀಸಲಾತಿಯಂತೆ ಸದರಿ ಜೇಷ್ಠತಾ ಪಟ್ಟಿಯನ್ನಾಧರಿಸಿ ಕಲ್ಯಾಣ ಕರ್ನಾಟಕ ಸ್ಥಳೀಯ ವೃಂದದ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳಿಗೆ ಕಲ್ಯಾಣ ಕರ್ನಾಟಕ ಸ್ಥಳಿಯ ವೃಂದಕ್ಕೆ ಮೀಸಲಿರಿಸಿದ ಸಹಾಯಕ ನಿರ್ದೇಶಕ ಹುದ್ದೆಗಳಿಗೆ ಮುಂಬಡ್ತಿ ನೀಡಲಾಗುತ್ತಿದೆ. ಸದರಿ ಜೇಷ್ಠತಾ ಪಟ್ಟಿಯನ್ನು ಪ್ರಶ್ನಿಸಿ ಯಾವುದೇ ವ್ಯಕ್ತಿ ಯಾವುದೇ ನ್ಯಾಯಿಕ ವೇದಿಕೆಗಳಲ್ಲಿ ಅರ್ಜಿ ದಾಖಲಿಸದ ಕಾರಣ ಸದರಿ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ಕ್ರಮ ಕೈಗೊಳ್ಳಲು ಕಾನೂನಾತ್ಮಕ ತೊಡಕುಗಳು ಕಂಡು ಬಂದಿರುವುದಿಲ್ಲ. |
| ಉ | ರದ್ದಾದ ಮೂಲ ಜೇಷ್ಠತಾ ಪಟ್ಟಿ ಆಧರಿಸಿ ಒಂದು ಭಾಗದ (HK) ನೌಕರರಿಗೆ ಸೇವೆಯಲ್ಲಿ ಮುಂಬಡ್ತಿ ನೀಡಿ ಉಳಿದ (non- HK) ನೌಕರರಿಗೆ ಸೇವೆಯಲ್ಲಿ ಮುಂಬಡ್ತಿ ನೀಡದೇ ತಾರತಮ್ಯ ಧೋರಣೆಯನ್ನು ಅನುಸರಿಸುತ್ತಿರುವ ವಿಷಯದ ಕುರಿತು ಸರ್ಕಾರದ ನಿಲುವೇನು (ಸ್ಪಷ್ಟವಾದ ಮಾಹಿತಿಯನ್ನು ಒದಗಿಸುವುದು) | ಕಲ್ಯಾಣ - ಕರ್ನಾಟಕ ಸ್ಥಳೀಯ ವೃಂದದ ಜೇಷ್ಠತಾ ಪಟ್ಟಿಯನ್ನು ಆಧರಿಸಿ ಮುಂಬಡ್ತಿ ನೀಡಲು ಯಾವುದೇ ಕಾನೂನಾತ್ಮಕ ತೊಡಕುಗಳು ಕಂಡು ಬಾರದ ಕಾರಣ ಕಲ್ಯಾಣ- ಕರ್ನಾಟಕ ಸ್ಥಳೀಯ ವೃಂದಕ್ಕೆ ಮೀಸಲಿರಿಸಿದ ಹುದ್ದೆಗಳ ಎದುರಿಗೆ ಮಾತ್ರ ಮುಂಬಡ್ತಿ ನೀಡಲಾಗಿದೆ. ಮಿಕ್ಕುಳಿದ ಮೂಲ/ಮಾತೃ ವೃಂದದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಮುಂಬಡ್ತಿ ನೀಡಲು ಕಾನೂನಾತ್ಮಕ ತೊಡಕುಗಳು ಇರುವ ಕಾರಣ ಅವರುಗಳನ್ನು ಮುಂಬಡ್ತಿಗೆ ಪರಿಗಣಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ಈ ಪ್ರಕರಣದಲ್ಲಿ ತಾರತಮ್ಯ ಪ್ರಶ್ನೆ ಉದ್ಭವವಾಗುವುದಿಲ್ಲ. ಮಿಕ್ಕುಳಿದ ಮೂಲ ವೃಂದಕ್ಕೆ ಮುಂಬಡ್ತಿಗೆ ಪರಿಗಣಿಸಬೇಕಾದ |

ಎಸ್. ಈಶ್ವರಪ್ಪ

| | | |
|---|---|---|
| | | ಹುದ್ದೆಗಳು ಖಾಲಿ ಉಳಿದಿರುತ್ತವೆ. |

ಗ್ರಾಅಪ 254 ಕೆ.ಎಸ್.ಎಸ್ 21(ಇ)

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು